ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಅನರ್ಹರು ಕರ್ತವ್ಯ ನಿರ್ವಹಿಸುವ ಕುರಿತು

ಶ್ರೀ ಎನ್. ರವಿಕುಮಾರ್(ವಿಧಾನ ಸಭೆಯಿಂದ ಚುನಾಯಿತರಾದವರು ) –

530 (649) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಸಿ ಎ ಜಿ ವರದಿಯಲ್ಲಿ ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸೈಬರ್ ವಿಭಾಗದ ವರದಿ ನೀಡುವ ಅಧಿಕಾರಿಗಳು ಅರ್ಹ ವಿದ್ಯಾಭ್ಯಾಸವನ್ನು ಹೊಂದಿಲ್ಲ ಎಂಬುದಾಗಿ ವರದಿ ನೀಡುರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಅರ್ಹ ವಿದ್ಯಾರ್ಹತೆಯನ್ನು ಹೊಂದಿರದ ಈ ನೌಕರರ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ;

(ಆ) ಅರ್ಹ ವಿದ್ಯಾರ್ಹತೆ ಪಡೆಯದೆ ಕೇವಲ 3 ತಿಂಗಳ ತರಬೇತಿ ಪಡೆದಿರುವ ಯಾವುದೇ ವ್ಯಕ್ತಿಯು, ಸೈಬರ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸಲು ಅರ್ಹರೆ; ಹಾಗಿದ್ದಲ್ಲಿ, ನೇಮಕ ಪ್ರಕ್ರಿಯೆ ಸಂದರ್ಭದಲ್ಲಿ ಅರ್ಹ ವಿದ್ಯಾಭ್ಯಾಸದ ಕುರಿತು ಮಾಹಿತಿ ಪಡೆಯುವ ಅವಶ್ಯಕತೆ ಇದೆಯೇ; ಯಾವುದೇ ಅರ್ಹತೆ ಇಲ್ಲದ ವ್ಯಕ್ತಿಯನ್ನು ನೇಮಕ ಮಾಡಿ ಆ ಬಳಿಕ 3 ತಿಂಗಳ ತರಬೇತಿ ನೀಡಿದಲ್ಲಿ ಎಂ.ಎಸ್.ಸಿ. ಕಂಪ್ಯೂಟರ್ ಸೈನ್ಸ್ ಪದವಿಗೆ ಸರಿಸಮ ಎಂದಂತಾಗಲಿಲ್ಲವೇ; ಈ ಕುರಿತು ಸರ್ಕಾರದ ನಿಲುವೇನು;

(ಇ) ಸಿಬ್ಬಂದಿಗಳ ಕೊರತೆಯ ನೆಪಮೊಡ್ಡಿ ಅನರ್ಹರನ್ನು ಸೈಬರ್ ವಿಭಾಗಕ್ಕೆ ನೇಮಕ ಮಾಡಿ 3 ತಿಂಗಳ ತರಬೇತಿ ನೀಡಲಾಗಿದೆ ಎಂದರೆ ಸೈಬರ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರು ನೇಮಕಾತಿ ಸಂದರ್ಭದಲ್ಲಿ ಅರ್ಹ ವಿದ್ಯಾಭ್ಯಾಸ ಹೊಂದಿಲ್ಲ ಎಂಬುದನ್ನು ಒಪ್ಪಿಕೊಂಡಂತಾಗಿದ್ದು, ಈ ರೀತಿಯಾಗಿ ಅನರ್ಹರನ್ನು ನೇಮಕ ಮಾಡಿದವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ;

(ಈ) 14.12.2018ರ ಪ್ರಶ್ನೆ ಸಂಖ್ಯೆ 695 ಮತ್ತು 19.07.2019ರ ಪ್ರಶ್ನೆ ಸಂಖ್ಯೆ: 215ಕ್ಕೆ ನೀಡಿರುವ ಉತ್ತರದಲ್ಲೂ ಸ್ಪಷ್ಟವಾಗಿ ಸಿಬ್ಬಂದಿಗಳು ಅರ್ಹ ವಿದ್ಯಾಭ್ಯಾಸ ಹೊಂದಿಲ್ಲ ಎಂಬುದಾಗಿ ಸದನಕ್ಕೆ ಲಿಖಿತ ಉತ್ತರ ನೀಡಿದ್ದು, ಇಲಾಖೆ ಅನರ್ಹರಿಂದಲೇ ಕ್ರೈಂ ಕುರಿತ ವಿಶ್ಲೇಷಣೆಗಳನ್ನು ನಡೆಸುತ್ತಿರುವುದಾಗಿ ಸ್ಪಷ್ಟವಾಗಿ ಲಿಖಿತ ಹೇಳಿಕೆ ನೀಡಿರುವುದು ಗಂಭೀರ ವಿಷಯವಾಗಿದ್ದು, ಈ ಕುರಿತು ಸರ್ಕಾರ ಯಾವ ಕ್ರಮ ಕೈಗೊಂಡಿದೆ?